ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಮರಳು ಟೆಂಡರ್

ಶ್ರೀ ಸುನೀಲ್ ವಲ್ಯಾಪುರ್ (ವಿಧಾನ ಸಭೆಯಿಂದ ಚುನಾಯಿತರಾದವರು):-

971(1120) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮರಳು ಆಮದು ಟೆಂಡರ್ ಕರೆದು ಮೂರು ವಾರಗಳ ನಂತರ ನೋಂದಣಿಯಾದ ಸೂಕ್ತ ವಿಳಾಸವಿಲ್ಲದಿರುವ ಕಂಪನಿಗೆ ಮರಳು ಟೆಂಡರ್ ಗುತ್ತಿಗೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಆ ಕಂಪನಿಯ ವಿವರ ನೀಡುವುದು)

(ಆ) ಮರಳು ಟೆಂಡರ್‌ಗೆ ಸಂಬಂಧಿಸಿದಂತೆ ಸಚಿವ ಸಂಪುಟದ ಒಪ್ಪಿಗೆ ಪಡೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಮರಳು ಟೆಂಡರ್ ಗುತ್ತಿಗೆಯ ಆಮದು ಸಂಬಂಧ ಎಷ್ಟು ಕಂಪನಿಗಳು ಜಾಗತಿಕ ಟೆಂಡರ್‌ನಲ್ಲಿ ಭಾಗವಹಿಸಿದ್ದವು ; (ವಿವರ ಒದಗಿಸುವುದು)

(ಈ) ಈ ಕಂಪನಿಗೆ ಏಕೆ ಟೆಂಡರ್ ನೀಡಲಾಗಿರುತ್ತದೆ ; (ವಿವರ ನೀಡುವುದು)

(ಉ) ಪ್ರತಿ 50 ಕೆ.ಜಿ. ಚೀಲ ಮರಳಿಗೆ ರೂ. 200 ನಿಗಧಿ ಮಾಡಿರುವುದು ನಿಜವೇ; ಈ ದರ ಸಮಂಜಸವಾಗಿದೆಯೇ ;

(ಊ) ಆಹಾರ ಸಾಮಗ್ರಿಗಳನ್ನು ವಿತರಣೆ ಮಾಡುವ ರೀತಿಯಲ್ಲಿ (ಪಿಡಿಎಸ್) ಕಡಿಮೆ ದರದಲ್ಲಿ ಮರಳನ್ನು ವಿತರಣೆ ಮಾಡಲು ಸರ್ಕಾರಕ್ಕಿರುವ ತೊಂದರೆಯೇನು ;

(ಋ) ಸರ್ಕಾರ 50 ಕೆ.ಜಿ. ಮರಳಿಗೆ ರೂ.200 ಹಾಗೂ 1 ಚೀಲ ಸಿಮೆಂಟ್‌ಗೆ ರೂ.420 ದರ ನಿಗಧಿ ಮಾಡಿರುವುದರಿಂದ ಸಾಮಾನ್ಯ ಜನರು ಮನೆ ನಿರ್ಮಿಸಲು ಸಾಧ್ಯವಾಗುತ್ತದೆಯೇ? (ವಿವರ ಒದಗಿಸುವುದು)